# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2031
ಸದಸ್ಯರ ಹೆಸರು : ಶ್ರೀ ರಘನಾಥ್ ರಾವ್ ಮಲ್ಕಾಪೂರೆ
(ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸಬೇಕಾದ ದಿನಾಂಕ : 24.03.2021
ಉತ್ತರಿಸುವ ಸಚಿವರು : ಮಾನ್ಯ ಕಂದಾಯ ಸಚಿವರು

| ಕ್ರ. ಸಂ | ಚುಕ್ಕೆ ಗುರುತಿಲ್ಲದ ಪ್ರಶ್ನೆ | ಉತ್ತರ |
|---|---|---|
| ಅ | ಕಲ್ಯಾಣ ಕರ್ನಾಟಕದ ಎಷ್ಟು ತಾಲ್ಲೂಕುಗಳನ್ನು ಬರ ಪೀಡಿತ ತಾಲ್ಲೂಕುಗಳೆಂದು ಗುರುತಿಸಲಾಗಿದೆ; ಬರಪೀಡಿತ ತಾಲ್ಲೂಕುಗಳಾಗಿ ಘೋಷಿಸಲು ಸರ್ಕಾರ ಅನುಸರಿಸುತ್ತಿರುವ ಮಾನದಂಡಗಳೇನೆ; | 2020-21 ನೇ ಸಾಲಿನಲ್ಲಿ ಕಲ್ಯಾಣ ಕರ್ನಾಟದ ಎಲ್ಲಾ ತಾಲ್ಲೂಕುಗಳಲ್ಲಿ ವಾಡಿಕೆಗಿಂತ ಹೆಚ್ಚು ಮಳೆಯಾಗಿರುವುದರಿಂದ, ಯಾವುದೇ ತಾಲ್ಲೂಕನ್ನು ಬರ ಪೀಡಿತ ತಾಲ್ಲೂಕು ಎಂದು ಘೋಷಿಸಿರುವುದಿಲ್ಲ.<br>ಬರ ತಾಲ್ಲೂಕು ಎಂದು ಘೋಷಿಸಲು ಕೇಂದ್ರ ಸರ್ಕಾರದಿಂದ, ಬರ ನಿರ್ವಾಹಣೆ ಕೈಪಿಡಿ – 2016 ರನ್ವಯ ನೀಡಿರುವ ಮಾನದಂಡಗಳ ವಿವರವನ್ನು ಅನುಬಂಧ ದಲ್ಲಿ ಲಗತ್ತಿಸಿದೆ. |
| ಆ | ಬರ ಪರಿಸ್ಥಿತಿ ನಿಭಾಯಿಸಲು ಸರ್ಕಾರವು ಜಿಲ್ಲಾಧಿಕಾರಿಗಳಿಗೆ ಎಷ್ಟು ಅನುದಾನ ಬಿಡುಗಡೆ ಮಾಡಿದೆ; (ಜಿಲ್ಲಾವಾರು ವಿವರ ನೀಡುವುದು) | ಅನ್ವಯಿಸುವುದಿಲ್ಲ. |
| ಇ | ಬೀದರ್ ಜಿಲ್ಲೆಯ ತಾಲ್ಲೂಕಿನಲ್ಲಿ ಅನಾವೃಷ್ಟಿಯಿಂದ ಎಷ್ಟು ರೈತರ ಬೆಳೆಗಳು ಹಾನಿಗೊಳಗಾಗಿವೆ ; (ಬೆಳೆವಾರು ಕ್ಷೇತ್ರ ಮತ್ತು ಹಾನಿ ಮೊತ್ತದ ಮಾಹಿತಿ ನೀಡುವುದು) | ಅನ್ವಯಿಸುವುದಿಲ್ಲ. |
| ಈ | ಹಾನಿಗೊಳಗಾದ ರೈತರಿಗೆ ಪರಿಹಾರ ನೀಡಿದ್ದಲ್ಲಿ, ಇಲ್ಲಿಯವರೆಗೆ ಎಷ್ಟು ರೈತರಿಗೆ ಎಷ್ಟು ಪರಿಹಾರ ನೀಡಲಾಗಿದೆ ; ಇಲ್ಲವಾದಲ್ಲಿ, ಇನ್ನೂ ಪರಿಹಾರ ನೀಡದೇ ಇರಲು ಕಾರಣಗಳೇನು ; ಬರ ಪರಿಹಾರ ನೀಡಲು ಸರ್ಕಾರ ಕೈಗೊಂಡ ಕ್ರಮಗಳೇನು ? | ಅನ್ವಯಿಸುವುದಿಲ್ಲ. |

ಕಂಇ 139 ಟಿಎನ್‌ಆರ್ 2021

(ಆರ್. ಅಶೋಕ)
ಕಂದಾಯ ಸಚಿವರು

**ಮಾನ್ಯ ವಿಧಾನ ಪರಿಷತ್ ಸದಸ್ಯರಾದ ಶ್ರೀ ರಘುನಾಥರಾವ್ ಮಲ್ಕಾಪೂರೆ ಇವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 2031 ಕ್ಕೆ ಅನುಬಂಧ**

ಭಾರತ ಸರ್ಕಾರ ಕೃಷಿ ಮಂತ್ರಾಲಯ ಪ್ರಕಟಿಸಿರುವ ಬರ ನಿರ್ವಹಣೆ ಕೈಪಿಡಿ, 2016 ಹಾಗೂ ತದನಂತರದ ಪರಿಷ್ಕೃತ ಕೈಪಿಡಿಯಲ್ಲಿ ಸೂಚಿಸಲಾಗಿರುವ ಮಾನದಂಡಗಳನ್ವಯ ರಾಜ್ಯದಲ್ಲಿ ಬರ ಪೀಡಿತ ತಾಲ್ಲೂಕುಗಳನ್ನು ಗುರುತಿಸಲಾಗುತ್ತದೆ. ಇದರನ್ವಯ ಬರಪೀಡಿತ ತಾಲ್ಲೂಕೆಂದು ಗುರುತಿಸಲು ಈ ಕೆಳಕಂಡ ಮಾನದಂಡಗಳನ್ನು ಪರಿಗಣಿಸಲಾಗುತ್ತದೆ.

**ಹಂತ-(1) ಕಡ್ಡಾಯ ಮಾನದಂಡಗಳು :**

1. **ಮಳೆ ಕೊರತೆ :** ವಾಡಿಕೆಗಿಂತ ವಾಸ್ತವಿಕ ಮಳೆ ಪ್ರಮಾಣವು ಶೇ.60 ಕ್ಕಿಂತ ಕಡಿಮೆಯಾಗಿರುವುದು.
2. **ಶುಷ್ಕ ವಾತಾವರಣ:** ಸತತವಾಗಿ ಮೂರು ವಾರ ಅಥವಾ ಅದಕ್ಕಿಂತ ಹೆಚ್ಚಿನ ಅವಧಿಗೆ ವಾಡಿಕೆಗಿಂತ ಕಡಿಮೆ ಮಳೆಯಾಗಿರುವುದು. (Dry spell)

ಈ ಮೇಲಿನ 2 ಕಡ್ಡಾಯ ಮಾನದಂಡಗಳ ಪೈಕಿ ಒಂದು ಮಾನದಂಡ ಅನ್ವಯವಾದಲ್ಲಿ ಮಾತ್ರ ಕೆಳಕಂಡ ಎರಡನೇ ಹಂತದ ಮಾನದಂಡಗಳನ್ನು ಪರಿಗಣಿಸಿ ಬರ ಪರಿಸ್ಥಿತಿ ನಿರ್ಧರಿಸಲಾಗುತ್ತದೆ.

**ಹಂತ – (2) ತತ್ಪರಿಣಾಮ ಮಾನದಂಡಗಳು :**

1. **ಕೃಷಿ ಬಿತ್ತನೆ ಪ್ರದೇಶ** - ಒಟ್ಟು ವಾಸ್ತವಿಕ ಬಿತ್ತನೆ ಪ್ರದೇಶವು ವಾಡಿಕೆಗಿಂತ ಶೇ.85 ಕ್ಕಿಂತ ಕಡಿಮೆ ಇರುವುದು.
2. **ಉಪಗ್ರಹ ಆಧಾರಿತ ಬೆಳೆ ಸೂಚ್ಯಂಕ** : NDV1/ NDWI - Dev (%) (<-30%) and VCI (%) (<40%)
3. **ತೇವಾಂಶ ಕೊರತೆ** : ಶೇ.50 ಕ್ಕಿಂತ ಕಡಿಮೆ ತೇವಾಂಶವಿರುವುದು.
4. **ಜಲ ಸಂಪನ್ಮೂಲ ಸೂಚ್ಯಂಕ**- ಜಲಾಶಯಗಳ, ಅಂತರ್ಜಲ ಮತ್ತು ಸಣ್ಣ ನೀರಾವರಿ ಕೆರೆಕಟ್ಟೆಗಳ ಪರಿಸ್ಥಿತಿ.

ಈ ಮೇಲಿನ ತತ್ಪರಿಣಾಮ ಮಾನದಂಡಗಳ ಪೈಕಿ ಎರಡು ಮಾನದಂಡಗಳು ಅನ್ವಯವಾದಲ್ಲಿ, ಬರ ಪರಿಸ್ಥಿತಿಯ ತೀವ್ರತೆಯನ್ನು ನಿರ್ಧರಿಸಿ, ಬರಪೀಡಿತ ತಾಲ್ಲೂಕು ಘೋಷಿಸಲಾಗುವುದು.